# ಪರಾಮಾನಸ ಶಾಸ್ತ್ರ

Para Psychology

ಇಂದಿರಾ ಜೈಪ್ರಕಾಶ್

ಪಾರಾಸೈಕಾಲಜಿ ಅಥವಾ ಪರಾಮಾನಸಶಾಸ್ತ್ರ ಎಂಬ ಶಾಖೆ ಸಾಮಾನ್ಯ ಜನರಲ್ಲಿ ಕುತೂಹಲ ಹುಟ್ಟಿಸುವಷ್ಟೇ ವಿಜ್ಞಾನಿಗಳಲ್ಲಿ ವಿವಾದ ಸೃಷ್ಟಿಸಿದೆ. ಮುಂದಾಗುವುದನ್ನು ಈಗಲೇ ತಿಳಿದುಕೊಳ್ಳುವುದು, ಬೇರೆಯವರ ಆಲೋಚನೆಗಳನ್ನು/ ಮನಸ್ಸನ್ನು 'ಓದುವುದು' ಸತ್ತವರಿಂದ ಸಂದೇಶ ಸ್ವೀಕರಿಸುವುದು ಮುಂತಾದ ವಿಷಯಗಳು ಸಹಜವಾಗಿಯೇ ಆಸಕ್ತಿ ಕೆರಳಿಸುತ್ತವೆ. ಕಣ್ಣು, ಕಿವಿ ಮುಂತಾದ ಇಂದ್ರಿಯಗಳ ನೆರವಿಲ್ಲದೆ ನಡೆಯುವ ಕೆಲವು ಮಾನಸಿಕ ಕ್ರಿಯೆಗಳಿಗೆ 'ಅತೀಂದ್ರಿಯ ಪ್ರತ್ಯಾಕ್ಷಾನುಭವಗಳು' (ಇ.ಎಸ್.ಪಿ – ಎಕ್ಸಟ್ರಾ ಸೆನ್ಸರಿ ಪರ್ಸೆಪ್ಶನ್) ಎಂದು ಕರೆಯುತ್ತಾರೆ. ಪರಾಮಾನಸ ಅಥವಾ ಅತೀಂದ್ರಿಯ ಮನೋವಿಜ್ಞಾನಿಗಳು ಇಂತಹ ಇಂದ್ರಿಯ ಗೋಚರವಲ್ಲದ, ಅಸಾಧಾರಣ ಎನಿಸುವ ಘಟನೆಗಳನ್ನು ಅಭ್ಯಸಿಸುತ್ತಾರೆ.

ಇಂತಹ ಮನೋವ್ಯಾಪಾರಗಳ ಬಗ್ಗೆ ಧರ್ಮಗ್ರಂಥಗಳು, ತತ್ವಶಾಸ್ತ್ರ ಮುಂತಾದವುಗಳಲ್ಲಿ ಬಹಳ ಉಲ್ಲೇಖ ದೊರೆಯುತ್ತದೆ. ಆದರೆ ವೈಜ್ಞಾನಿಕವಾಗಿ ಇದರ ಅಧ್ಯಯನ ಪ್ರಾರಂಭವಾಗಿದ್ದು 1882 ರಲ್ಲಿ ಲಂಡನ್ ನಗರದಲ್ಲಿ 'ಭೌತಾತೀತ ವಿಷಯಗಳ ಸಂಶೋಧನಾ ಸಮಾಜದ' ಸ್ಥಾಪನೆಯಾದಂದಿನಿಂದ. ಕೆಲವು ಗಣ್ಯ ವಿದ್ವಾಂಸರು, ರಾಜಕಾರಣಿಗಳು, ತತ್ವಜ್ಞಾನಿಗಳು ಪರಾಮಾನಸ ಕ್ರಿಯೆಯ ಸಂಶೋಧನೆಗೆ ಪ್ರೋತ್ಸಾಹ ನೀಡಿದರು. ಮೊದಲು ಇದು 'ಸೈಕಿಕ್ ರಿಸರ್ಚ್' / ಸೈ ಫಿನೋಮಿನಾ ಎಂದು ಕರೆಯಲ್ಪಡುತ್ತಿತ್ತು. 1889 ರಲ್ಲಿ ತತ್ವಶಾಸ್ತ್ರಜ್ಞ ಮ್ಯಾಕ್ಸ್ ದೆಸ್ವಾ ಪಾರಾ ಸೈಕಾಲಜಿ ಎಂಬ ಪದವನ್ನು ಮೊದಲು ಬಳಸಿದ. 'ಪಾರಾ' ಎಂಬ ಗ್ರೀಕ್ ಪದದ ಅರ್ಥ 'ಪಕ್ಕದಲ್ಲಿ, ಹೊಂದಿಕೊಂಡಂತೆ' ಎಂದು. ಈ ಕ್ಷೇತ್ರದ ಬೆಳವಣಿಗೆಗೆ ಮುಖ್ಯಕಾರಣನಾದ ಜೆ.ಬಿ. ರ್ಹೈನ್ 1930 ರಲ್ಲಿ ಪರಾಮಾನಸ ಶಾಸ್ತ್ರ ಎಂಬ ಹೆಸರನ್ನು ಸೂಚಿಸಿ ಅದನ್ನೇ ಬಳಕೆಗೆ ತಂದ. ಅಸಾಧಾರಣ ಎನಿಸುವ, ಸಾಮಾನ್ಯ ಅರಿವಿಗೆ ಸಿಗದಂತಹ ಅನುಭವಗಳ, ಘಟನೆಗಳ ವೈಜ್ಞಾನಿಕ ಅಧ್ಯಯನವನ್ನು ಪರಾಮಾನಸ ವಿಜ್ಞಾನ ಎನ್ನಲಾಗಿದೆ. 1930 ರಿಂದ 1960 ರವರಗೆ ರ್ಹೈನ್, ಅವನ ಸಹಯೋಗಿ ಕಾರ್ಲ್ ಜೆನರ್ ಅನೇಕ ಹೊಸ ವಿಧಾನಗಳನ್ನು ಉಪಯೋಗಿಸಿ ಈ ಕ್ಷೇತ್ರವನ್ನು ಜನಪ್ರಿಯಗೊಳಿಸಿದರು.

ಅಮೆರಿಕೆಯ ಸ್ಟಾನ್ಫೋರ್ಡ್ ಮತ್ತು ಡ್ಯೂಕ್ ವಿಶ್ವವಿದ್ಯಾಲಯಗಳಲ್ಲಿ ಈ ಶಾಖೆ ಬೆಳೆಯಿತು. 1957 'ದಿ ಪಾರಾಸೈಕಲಾಜಿಕಲ್ ಅಸೋಸಿಯೇಶನ್' ಉತ್ತರ ಕರೋಲಿನಾದಲ್ಲಿ ಸ್ಥಾಪಿತವಾಯಿತು. ಅಮೆರಿಕೆಯ ವಿಜ್ಞಾನ ಪ್ರಗತಿಸಂಸ್ಥೆಯಲ್ಲಿ ಸದಸ್ಯತ್ವವೂ 1969 ರಲ್ಲಿ ದೊರೆತಿತು. 70ರ ದಶಕದಿಂದ ವರ್ಜೀನಿಯಾ ಸ್ಕೂಲ್ ಆಫ್ ಮೆಡಿಸಿನ್‌ನ ಮನೋವೈದ್ಯ ಈಯಾನ್ ಸ್ಟೀವನ್‌ಸನ್ ಮತ್ತು ಭಾರತದ ರಾಷ್ಟ್ರೀಯ ಮಾನಸಿಕ ಆರೋಗ್ಯ ಮತ್ತು ನರವಿಜ್ಞಾನ ಸಂಸ್ಥೆಯ ಸತ್ವಂತ್ ಪಸ್ರಿಚಾ ಪುನರ್ಜನ್ಮ ಹೊಂದಿದವರು ಎನ್ನಲಾದ ಮಕ್ಕಳನ್ನು ಆಭ್ಯಸಿಸಿದ್ದಾರೆ. 1980 ರಿಂದಾಚೆ ಇಂತಹ ಸಂಶೋಧನೆಗಳಿಗೆ ಧನಸಹಾಯ ಮತ್ತು ಪ್ರೋತ್ಸಾಹ ಎರಡೂ ಕುಗ್ಗತೊಡಗಿತು.

ಪರಾಮಾನಸ ವಿಜ್ಞಾನಿಗಳು ಅಭ್ಯಸಿಸುವ ಕೆಲವು ವಿಷಯಗಳು ಹೀಗಿವೆ. ಬಹಳ ಕಠಿಣ ವೈಜ್ಞಾನಿಕ ನಿಯಮಗಳನ್ನು ಅನುಸರಿಸಿ ಪರೀಕ್ಷಿದಾಗ ಇವ್ಯಾವಕ್ಕೂ ದೃಢ ಸಾಕ್ಷ್ಯ ಸಿಕ್ಕಿಲ್ಲ.

1. ಅತೀಂದ್ರಿಯ ಪ್ರತ್ಯಕ್ಷಾನುಭವಗಳು. ಇದು ಇಂದ್ರಿಯಗಳ ಸಹಾಯವಿಲ್ಲದೆ ದೊರೆಯುವ ಜ್ಞಾನ. ಇದರಲ್ಲಿ ಕೆಲವು ವಿಧಗಳು– ಅ) ದೂರ ಮನಸ್ಪರ್ಶ (ಟೆಲಿಪಥಿ)– ಇದರಲ್ಲಿ ಮಾಹಿತಿ ಒಬ್ಬರಿಂದ ಇನ್ನೊಬ್ಬರಿಗೆ ಇಂದ್ರಿಯಗಳ ನೆರವಿಲ್ಲದೆ ನಡೆಯುತ್ತದೆ. ದೂರದಿಂದಲೇ ಇನ್ನೊಬ್ಬರ ಮನಸ್ಸನ್ನು 'ಓದುವುದಲ್ಲದೆ' ಬೇರೆಯವರ ಮನಸ್ಸಿನ ಮೇಲೆ ಪ್ರಭಾವ ಬೀರಬಲ್ಲ ಸಾಮರ್ಥ್ಯ. ಆ) ಪೂರ್ವಜ್ಞಾನ ( ಪ್ರಿಕಾಗ್ನಿಶನ್)– ಭವಿಷ್ಯದ ಸನ್ನಿವೇಶ ಅಥವಾ ಘಟನೆಗಳ ಬಗ್ಗೆ ಮೊದಲೇ ಅರಿವಾಗುವುದು. ಇ). ಅತೀಂದ್ರಿಯ ದೃಷ್ಟಿ( ಕ್ಲೇರ್‌ವಾಯನ್ಸ್)– ಕಣ್ಣಿಗೆ ಕಾಣದ ವಿಷಯ, ವಸ್ತುಗಳ ಬಗ್ಗೆ ವಿಜ್ಞಾನಕ್ಕೆ ತಿಳಿದಿರುವ ಯಾವುದೇ ಮೂಲಗಳನ್ನು ಬಳಸದೇ ಗ್ರಹಿಸುವುದು. ಈ) ಗತಸ್ಮೃತಿ ( ರಿಟ್ರೋಕಾಗ್ನಿಶನ್) ಹಿಂದೆ ನಡೆದಿರುವ ಘಟನೆಗಳ ಅತೀಂದ್ರಿಯ ನೆನಪು.

2. ಅಭೌತ ಚಲನೆ ( ಸೈಕೋ ಕೈನೆಸಿಸ್– ಪಿ.ಕೆ) ಮಾನಸಿಕ ಶಕ್ತಿಯಿಂದ ವಸ್ತು, ಸಮಯ, ಶಕ್ತಿಯ ಮೇಲೆ ಪ್ರಭಾವ ಬೀರುವುದು. ಮುಚ್ಚಿರುವ ಕೋಣೆಯಲ್ಲಿ ಗೋಡೆಗಳ ಮೂಲಕ ವಸ್ತುಗಳನ್ನು ಒಳಗೆ ತರುವುದು 'ಅಪೋರ್ಟ್' . ಭಾವಚಿತ್ರಗಳಲ್ಲಿ ಬದಲಾವಣೆ ತರಿಸುವುದು 'ಸೈಕೋಗ್ರಾಫಿ'

3. ಅತಿಮಾನುಷ ತೋರ್ಕೆ (ಅಪಾರಿಶನ್ಸ್)– ದೂರದಲ್ಲಿರುವ ಬಂಧುಗಳು ಅಥವಾ ಸ್ನೇಹಿತರನ್ನು ತಾವಿರುವ ಜಾಗದಲ್ಲಿ ನೋಡಿದ್ದು ನಂತರ ಅವರ ಬಗ್ಗೆ ಅಪಘಾತ ಅಥವಾ ಮರಣದ ಸುದ್ದಿ ಬಂದದ್ದನ್ನು ಅನೇಕರು ತಿಳಿಸುತ್ತಾರೆ. 'ಸದಾ ಕಾಡುವಿಕೆ' ( ಹಾಂಟಿಂಗ್) ಯಲ್ಲಿ ಯಾವುದೋ ಅಸ್ಪಷ್ಟ ಆಕಾರ ಅಥವಾ ಅಪರಿಚಿತ ವ್ಯಕ್ತಿಯ ಇರುವಿನ ಅನುಭವ ಮತ್ತೆ ಮತ್ತೆ ಉಂಟಾಗಬಹುದು.

4. ಮಾಧ್ಯಮಗಳ ಮೂಲಕ ಆತ್ಮಗಳ ಜೊತೆ ಸಂಪರ್ಕ. ಸತ್ತವ್ಯಕ್ತಿಗಳ ಜೊತೆ ಸಂಪರ್ಕ ಸಾಧಿಸಬಲ್ಲವರನ್ನು 'ಮೀಡಿಯಂ' ಗಳು (ಮಾಧ್ಯಮಿಗಳು) ಎನ್ನುತ್ತಾರೆ. ಈ ಬಗ್ಗೆ ಹಿಂದೆ ಬಹಳಷ್ಟು ಪ್ರಯೋಗಗಳು ನಡೆದಿದ್ದವು. ಇವುಗಳಲ್ಲಿ ಅನೇಕ ವರದಿಗಳು ಪೊಳ್ಳು ಎಂದು ಕಂಡು ಬಂದಿತ್ತು.

5. ಪುನರ್ಜನ್ಮ (ರೀಇನ್ಕರ್ನೇಶನ್) ಚಿಕ್ಕ ಮಕ್ಕಳು ಕೆಲವೊಮ್ಮೆ ತಮ್ಮ ಹಿಂದಿನ ಜನ್ಮದ ವಿಷಯಗಳನ್ನು ಹೇಳುತ್ತಾರೆ. ಅಕಾಲ ಮೃತ್ಯುವಿಗೆ ಒಳಗಾದವರಲ್ಲಿ ಇಂತಹ ಸ್ಮೃತಿಗಳು ಹೆಚ್ಚು ಎನ್ನಲಾಗಿದೆ. 2 ರಿಂದ 4 ವರ್ಷಗಳ ಇಂತಹ ಮಕ್ಕಳು ತಮ್ಮ ವಯಸ್ಸು ಮತ್ತು ವಾತಾವರಣಕ್ಕೆ ವಿಚಿತ್ರ ಎನಿಸುವ ಮಾತುಗಳನ್ನಾಡುತ್ತಾರೆ. ತಾವು ನೋಡಿರದ ಸ್ಥಳ ಮತ್ತು ವ್ಯಕ್ತಿಗಳ ಬಗ್ಗೆ ಮಾತನಾಡುತ್ತಾರೆ. ಕೆಲವು ರೀತಿಯ ಹುಟ್ಟುಗುರುತುಗಳನ್ನೂ ಹೊಂದಿರುತ್ತಾರೆ ಎನ್ನಲಾಗಿದೆ.

6. ಮರಣ ಸಮೀಪದ ಅನುಭವಗಳು (ನಿಯರ್ ಡೆತ್ ಎಕ್ಸಪೀರಿಯನ್ಸ್) 1975 ರಲ್ಲಿ ರೇಮಂಡ್ ಮೂಡಿ ಜೂನಿಯರ್ ಎಂಬಾತ ಇನ್ನೇನು ಸತ್ತೇ ಹೋದರು ಎಂದಿದ್ದು ಆಶ್ಚರ್ಯಕರವಾಗಿ ಬದುಕುಳಿದವರ ಅನುಭವಗಳನ್ನು ವರದಿ ಮಾಡಿದ. ಕೆನ್ನೆತ್ ರಿಂಗ್ ಎಂಬ ಸಂಶೋಧಕ ಇಂತಹ 102 ಜನ 'ಸತ್ತು ಬದುಕಿದವರ' ಅನುಭವಗಳನ್ನು ದಾಖಲಿಸಿದ. ಇಂತಹವರು 'ದೇಹಾತೀತ ಅನುಭವಗಳನ್ನು' (ಔಟ್ ಆಫ್ ಬಾಡಿ ಎಕ್ಸಪೀರಿಯನ್ಸ್– ಓ.ಓ.ಬಿ.ಈ) ವರದಿ ಮಾಡಿದರು. ಇದರಲ್ಲಿ ತನ್ನ ದೇಹದಿಂದ ಹೊರಗೆ ನಿಂತು ತನ್ನ ಸುತ್ತ ನಡೆಯುವ ವಿದ್ಯಮಾನಗಳನ್ನು ವ್ಯಕ್ತಿ ವೀಕ್ಷಿಸುತ್ತಾನೆ. ಇದಲ್ಲದೆ ಇನ್ನೂ ಪೋಲ್ಟರ್‌ಗೇಯಿಸ್ಟ್ (ಗಲಾಟೆ ಮಾಡುವ ಭೂತ) ದೇಹವನ್ನು ಸುತ್ತುವರಿದಿರುವ 'ಆರಾ' (ಪ್ರಭಾವಳಿ) ಮತ್ತು ಅದರ ಚಿತ್ರ ತೆಗೆಯಲು 'ಕರ್ಲಿಯನ್ ಫೊಟೋಗ್ರಫಿ' ಮುಂತಾದ ಅನೇಕ ವಿದ್ಯಮಾನಗಳನ್ನು ಈ ಶಾಖೆಯಲ್ಲಿ ಅಭ್ಯಸಿಸಲಾಗುತ್ತದೆ.

ವೈಜ್ಞಾನಿಕ ವೃತ್ತಗಳಲ್ಲಿ ಸ್ಥಾನ ಪಡೆಯಲು ವಿದ್ಯುನ್ಮಾನ ಮತ್ತು ಗಣಕಯಂತ್ರ ಕ್ಷೇತ್ರದಲ್ಲಿ ನಡೆದಿರುವ ಅಗಾಧ ಪ್ರಗತಿಯನ್ನು ಆಧರಿಸಿ ಅತಿಮಾನಸ ವಿದ್ಯಮಾನಗಳನ್ನು ಪರೀಕ್ಷಿಸಲು ಹೊಸ ವಿಧಾನಗಳನ್ನು ಬಳಸುತ್ತಿದ್ದಾರೆ. ಆದರೂ ಈ ಕ್ಷೇತ್ರಕ್ಕೆ ವೈಜ್ಞಾನಿಕ ಮನ್ನಣೆ ದೊರೆತಿಲ್ಲ. ಮುಖ್ಯವಾಹಿನಿಯ ಮನೋವಿಜ್ಞಾನಿಗಳು ಈ ಕ್ಷೇತ್ರವನ್ನು ಒಪ್ಪಿಕೊಳ್ಳಲು ಸಿದ್ಧರಿಲ್ಲ. ಇದಕ್ಕೆ ಕಾರಣಗಳು ಹಲವು. ಕ್ರಮಬದ್ಧ ಹಾಗೂ ಕಠಿಣ ನಿಯಮಗಳನ್ನು ಅನುಸರಿಸಿ ಪ್ರಯೋಗಗಳನ್ನು ಮಾಡಿದಾಗ ಅನೇಕ ಅತಿಮಾನಸ ಕ್ರಿಯೆಗಳು ಕಾಣಬಂದಿಲ್ಲ. ರ್‍ಹೈನ್ ನ ಉತ್ತರಾಧಿಕಾರಿಯಾದ ವಾಲ್ಟರ್ ಲೆವಿ ಪ್ರಕಟಿಸಿದ ಅನೇಕ 'ಪ್ರಯೋಗ' ಗಳು ಸುಳ್ಳು- ಕಪೋಲಕಲ್ಪಿತ ಎಂದು ತಿಳಿದುಬಂದು ಈ ಕ್ಷೇತ್ರದ ವಿಶ್ವಸನೀಯತೆಗೆ ಧಕ್ಕೆ ತಂದಿತು. ರ್‍ಹೈನ್ ಕೂಡಾ ತನ್ನ ನಂಬಿಕೆಗಳಿಗೆ ವಿರುದ್ಧವಾದ ಮಾಹಿತಿಗಳನ್ನು ವರದಿ ಮಾಡುತ್ತಿರಲಿಲ್ಲ ಎಂಬ ಅಪವಾದವಿದೆ. ಆತ್ಮಗಳನ್ನು ಅವಾಹಿಸುವ ಮಾಧ್ಯಮಿಗಳು ನಕಲಿ ಎಂದು ಅನೇಕರು ತೋರಿಸಿಕೊಟ್ಟಿದ್ದಾರೆ. ಜೇಮ್ಸ್ ರ್‍ಯಾಂಡಿ ಎಂಬ ಗಾರುಡಿಗನಂತೂ ನಕಲಿ ಪ್ರಯೋಗಗಳನ್ನು ಬೇಕೆಂತಲೇ ರಚಿಸಿ ವಿದ್ವಾಂಸರುಗಳನ್ನು ವಂಚಿಸಿ ಅವರು ಹಾಸ್ಯಾಸ್ಪದವಾಗುವಂತೆ ಮಾಡಿದ್ದ. ವಂಚಕರು, ಕಪಟಿಗಳು ಅನೇಕ ಸುಳ್ಳು ದಾಖಲೆಗಳನ್ನು ನಿರ್ಮಿಸಿದ್ದು ಸತ್ಯ ಹೊರಬಿದ್ದಾಗ ಪ್ರಾಮಾಣಿಕ ಸಂಶೋಧಕರೂ ಸಂಶಯಕ್ಕೆ ಒಳಗಾಗಿದ್ದಾರೆ.

ಪ್ರಿನ್ಸ್ಟನ್ ಎಂಜಿನಿಯರಿಂಗ್ ಅನಾಮಲಿಸ್ ರಿಸರ್ಚ್ ಲ್ಯಾಬೊರೆಟರಿ ಸತತ 28 ವರ್ಷಗಳು ಈ ವಿಷಯದ ಅಧ್ಯಯನ ಮಾಡಿ ನಿಖರವಾದ ಮಾಹಿತಿ ಸಿಗಲಿಲ್ಲ ಎಂದು ವರದಿ ಮಾಡಿತು. ಸೂಸನ್ ಬ್ಲಾಕ್ಮೋರ್ ಎಂಬ ಸಂಶೋಧಕಿ ದಶಕಗಳ ಸಂಶೋಧನೆಯ ನಂತರ ಈ ಅಧ್ಯಯನವನ್ನು ನಿಷ್ಪ್ರಯೋಜಕ ಎಂದು ಕೈಬಿಟ್ಟರು ಎನ್ನಲಾಗಿದೆ. ರ್‍ಹೈನ್ ನ ನಿವೃತ್ತಿಯ ನಂತರ ಡ್ಯೂಕ್ ವಿಶ್ವವಿದ್ಯಾಲಯ ಈ ವಿಭಾಗವನ್ನು ಮುಚ್ಚಿತು. ಅಮೆರಿಕೆಯಲ್ಲಿ 'ಸ್ಟಾರ್‌ಗೇಟ್' ಎಂದು ಗುಪ್ತಚರ ವಿಭಾಗದ ಮಂತ್ರಾಲಯದ ಸಹಾಯದಿಂದ 45 ವರ್ಷ ಸಂಶೋಧನೆ ನಡೆದು ಇದು ನಿರುಪಯುಕ್ತ ಎಂದು ನಿಲ್ಲಿಸಲಾಯಿತು. ಸ್ಟಾನ್‌ಫೋರ್ಡ್ ವಿಶ್ವವಿದ್ಯಾಲಯ ಅಪಾರ ಹಣ ವೆಚ್ಚಮಾಡಿ ಹತ್ತುಸಾವಿರಕ್ಕೂ ಹೆಚ್ಚು ಪ್ರಯೋಗಗಳನ್ನು ಮಾಡಿ ಇದರಲ್ಲಿ ಯಾವ ಸತ್ಯವೂ ಇಲ್ಲ ಎಂದು ನಿಲ್ಲಿಸಿತು. ತಾವು ಅತೀಂದ್ರಿಯ ಘಟನೆ ಸಾಧಿಸಿದ್ದೇವೆ ಎನ್ನುವವರನ್ನು ಪ್ರಯೋಗಗಳಿಗೆ ಒಳಪಡಿಸಿದಾಗ ಅವರ ಹೇಳಿಕೆಗಳಿಗೆ ಆಧಾರವಿಲ್ಲ ಎಂದು ಸಾಬೀತಾದವು.

ಸೂಕ್ತ ಸಿದ್ಧಾಂತದ ತಳಹದಿಯಾಗಲಿ, ವಿಷಯ ಪರಿಶೀಲನೆಗೆ ವಸ್ತುನಿಷ್ಠ ವಿಧಾನಗಳಾಗಲಿ ಇಲ್ಲ. ಆದುದರಿಂದ ಇದು 'ಸ್ಯುಡೋ ಸೈನ್ಸ್- ನಕಲಿ ವಿಜ್ಞಾನ' ಎನ್ನುವವರೂ ಇದ್ದಾರೆ. ಈಗ ಸ್ಥಾಪಿತವಾಗಿರುವ ಭೌತಿಕ ವಿಜ್ಞಾನದ ಯಾವ ನಿಯಮಗಳಿಗೂ ಒಳಪಡದ ಕಾರಣ ಇಂತಹ ಅಧ್ಯಯನಗಳು ಅವೈಜ್ಞಾನಿಕ ಎನ್ನುವವರೂ ಇದ್ದಾರೆ. ನಮಗೆ ಈಗ ಅರ್ಥವಾಗದ ಮಾತ್ರಕ್ಕೆ ಕಾಲ ಮತ್ತು ಸ್ಥಳಗಳ ಸೀಮೆಯನ್ನು ದಾಟಿರುವಂತಹ ವಿದ್ಯಮಾನಗಳನ್ನು ಅಧ್ಯಯನ ಮಾಡದೆ ಬಿಡಬಾರದು ಎನ್ನುವ ಪರಾಮಾನಸ ವಿಜ್ಞಾನಿಗಳಿದ್ದಾರೆ. ಪ್ರಾಯಶಃ ಕೆಲವು ರೀತಿಯ ಅತೀಂದ್ರಿಯ ಅನುಭವಗಳು ಕೆಲವು ಜನರಲ್ಲಿ ಕೆಲವು ಚೇತನಾವಸ್ಥೆಗಳಲ್ಲಿ ಆಗಬಹುದು ಎಂದು ಎಚ್ಚರಿಕೆಯಿಂದ ಇದನ್ನು ಒಪ್ಪಿಕೊಳ್ಳುವವರು ಹಲವರು. ಈ ಕ್ಷೇತ್ರದಲ್ಲಿ ನಂಬಿಕೆ ಇರುವವರು ಅತಿಮಾನಸ ಕ್ರಿಯೆಗಳು ಅಸಾಧಾರಣವಾಗಿದ್ದು, ಸಾಮನ್ಯ ಸಮಯ-ಸ್ಥಳ ನಿಯಮಗಳಿಗೆ ಬದ್ಧವಾಗಿಲ್ಲ, ಆದುದರಿಂದ ಅವುಗಳನ್ನು ಸಾಧಾರಣ ಭೌತಿಕ ವಿಧಾನಗಳಿಂದ ಪರೀಕ್ಷಿಸಲು ಸಾಧ್ಯವಿಲ್ಲ ಎನ್ನುತ್ತಾರೆ. ಇಂತಹ ಘಟನೆಗಳು ಸಾಧ್ಯವಿರಬಹುದು,ಆದರೆ ಅವುಗಳ ವೈಜ್ಞಾನಿಕ ವಿವರಣೆ

ಇನ್ನೂ ಹೊಳೆದಿಲ್ಲ. ಹಾಗಾಗಿ ಈ ವಿಷಯಗಳ ಸತ್ಯತೆಯ ಬಗ್ಗೆ ಜಾಗರೂಕತೆ ಅಗತ್ಯ ಎನ್ನುವವರೇ ಹೆಚ್ಚು. ಒಟ್ಟಿನಲ್ಲಿ ಈ ಕ್ಷೇತ್ರದಲ್ಲಿ ಗಟ್ಟಿಯಾದ ಸಾಕ್ಷ್ಯಗಳಿಗಿಂತ ವಿವಾದಗಳೇ ಹೆಚ್ಚಾಗಿವೆ.